# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 597
2. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಡಾ॥ ಚಂದ್ರಶೇಖರ್.ಬಿ.ಪಾಟೀಲ್ (ಪದವೀಧರರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 04.03.2021
4. ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಅ) ಕಳೆದ ಒಂದು ವರ್ಷದ ಅವಧಿಯಲ್ಲಿ ಕಲಬುರಗಿ ಮತ್ತು ಬೀದರ್ ಜಿಲ್ಲೆಗಳಲ್ಲಿ ಅಕ್ರಮ ಗಾಂಜಾ ಮಾರಾಟಕ್ಕೆ ಸಂಬಂಧಿಸಿದಂತೆ ದಾಖಲಾದ ಕೇಸ್‌ಗಳ ಸಂಖ್ಯೆ ಎಷ್ಟು ;</td><td>ಕಳೆದ 2020ನೇ ಸಾಲಿನಲ್ಲಿ ಕಲಬುರಗಿ ಮತ್ತು ಬೀದರ್ ಜಿಲ್ಲೆಗಳಲ್ಲಿ ಅಕ್ರಮ ಗಾಂಜಾ ಮಾರಾಟಕ್ಕೆ ಸಂಬಂಧಿಸಿದಂತೆ ದಾಖಲಾದ ಕೇಸ್‌ಗಳ ಸಂಖ್ಯೆ ಈ ಕೆಳಕಂಡಂತಿದೆ.
<table>
<tr><th>ಘಟಕ</th><th>ದಾಖಲಿಸಲಾದ ಪ್ರಕರಣಗಳ ಸಂಖ್ಯೆ</th></tr>
<tr><td>ಬೀದರ್ ಜಿಲ್ಲೆ</td><td>22</td></tr>
<tr><td>ಕಲಬುರಗಿ ಜಿಲ್ಲೆ</td><td>28</td></tr>
<tr><td>ಕಲಬುರಗಿ ನಗರ</td><td>17</td></tr>
</table></td></tr>
<tr><td>ಆ</td><td>ಆ) ಈ ಸಂಬಂಧ ಎಷ್ಟು ಜನರನ್ನು ಬಂಧಿಸಲಾಗಿದೆ ಮತ್ತು ಬಂಧಿತರಿಂದ ವಶಕ್ಕೆ ಪಡೆದ ಗಾಂಜಾದ ಪ್ರಮಾಣ ಎಷ್ಟು ;</td><td>ಈ ಸಂಬಂಧ ಬಂಧಿಸಲಾಗಿರುವವರ ಸಂಖ್ಯೆ, ಬಂಧಿತರಿಂದ ವಶಕ್ಕೆ ಪಡೆದ ಗಾಂಜಾದ ಪ್ರಮಾಣ ಮತ್ತು ಮೌಲ್ಯದ ವಿವರಗಳು ಈ ಕೆಳಕಂಡಂತಿದೆ.
<table>
<tr><th>ಘಟಕ</th><th>ಗಾಂಜಾ ಮಾರಾಟದಡಿ ಬಂಧಿಸಿರುವವರ ಸಂಖ್ಯೆ</th><th>ಬಂಧಿತರಿಂದ ವಶಪಡಿಸಿಕೊಂಡಿರುವ ಗಾಂಜಾದ ಪ್ರಮಾಣ</th><th>ವಶಪಡಿಸಿಕೊಂಡಿರುವ ಗಾಂಜಾದ ಅಂದಾಜು ಮೌಲ್ಯ</th></tr>
<tr><td>ಬೀದರ್ ಜಿಲ್ಲೆ</td><td>46</td><td>803.395 ಕೆ.ಜಿ</td><td>60,09,270/-</td></tr>
<tr><td>ಕಲಬುರಗಿ ಜಿಲ್ಲೆ</td><td>32</td><td>932.293 ಕೆ.ಜಿ</td><td>29,52,900/-</td></tr>
<tr><td>ಕಲಬುರಗಿ ನಗರ</td><td>28</td><td>41.570 ಕೆ.ಜಿ</td><td>2,21,300/-</td></tr>
</table></td></tr>
<tr><td>ಇ</td><td>ಇ) ಕಲಬುರಗಿ ಮತ್ತು ಬೀದರ್ ಜಿಲ್ಲೆಯಲ್ಲಿ ಅಕ್ರಮ ಗಾಂಜಾ ದಂಧೆ ನಿಯಂತ್ರಣಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು ?</td><td><u>ಕಲಬುರಗಿ ಮತ್ತು ಬೀದರ್ ಜಿಲ್ಲೆಗಳಲ್ಲಿ ಅಕ್ರಮ ಗಾಂಜಾ ದಂಧೆಯನ್ನು ನಿಯಂತ್ರಿಸಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.</u><br><br>1) ಬೀದರ ಜಿಲ್ಲೆಗೆ ಗಡಿ ಜಿಲ್ಲೆಯಿಂದ ಅಕ್ರಮವಾಗಿ ಗಾಂಜಾ ಕಳ್ಳಸಾಗಣಿಕೆಯಾಗದಂತೆ ಗಡಿ ಭಾಗದಲ್ಲಿ ತಾತ್ಕಾಲಿಕ ಚೆಕ್ ಪೋಸ್ಟನ್ನು ತೆರೆದು ಸಂಶಯುಕ್ತ ವಾಹನಗಳನ್ನು ಚೆಕ್ ಮಾಡಿ ಗಾಂಜಾ ಸಾಗಾಣಿಕೆಯಾಗದಂತೆ ನಿಯಂತ್ರಿಸಲಾಗುತ್ತಿದೆ.</td></tr>
</table>

| | | |
|---|---|---|
| | | 2) ಪೊಲೀಸ್ ಅಧಿಕಾರಿಗಳು ತಾಂಡಾಗಳಿಗೆ ಆಕಸ್ಮಿಕ ದಾಳಿ ಮಾಡಿ, ಮಾದಕ ವಸ್ತುಗಳು ಕಂಡುಬಂದಲ್ಲಿ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ.<br>3) ಮಾದಕ ವಸ್ತುಗಳ ಸಂಗ್ರಹ, ಮಾರಾಟ ಮತ್ತು ಸಾಗಾಣೆಯ ಕುರಿತು ಬಾತ್ಮಿದಾರರಿಂದ ಗುಪ್ತ ಮಾಹಿತಿ ಸಂಗ್ರಹ ಮಾಡಿ ಕಾನೂನು ಕ್ರಮ ಜರುಗಿಸಲಾಗುತ್ತಿದೆ.<br>4) ಮಾದಕ ವಸ್ತುಗಳ ಪ್ರಕರಣಗಳಲ್ಲಿ ತಲೆ ಮರೆಸಿಕೊಂಡ(ಪರಾರಿ) ಆರೋಪಿಗಳಿಗೆ ಪತ್ತೆ ಹಚ್ಚಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗುತ್ತಿದೆ.<br>5) ರೂಢಿಗತ ಆರೋಪಿತರ ವಿರುದ್ಧ ರೌಡಿ/ಎಂಒಬಿ ಹಾಳೆಗಳನ್ನು ತೆರೆದು ಅವರ ಮೇಲೆ ಕಟ್ಟು ನಿಟ್ಟಾಗಿ ನಿಗಾ ವಹಿಸಲಾಗುತ್ತಿದೆ.<br>6) ಕಲಬುರಗಿ ನಗರದಲ್ಲಿ ಅಕ್ರಮ ಗಾಂಜಾ ದಂಧೆಯನ್ನು ನಿಯಂತ್ರಣ ಮಾಡಲು ಶ್ರೀ ಗೀರಿಶ ಎಸಿಪಿ "ಬಿ" ಉಪ ವಿಭಾಗ ಕಲಬುರಗಿ ನಗರ ರವರ ನೇತೃತ್ವದಲ್ಲಿ ಒಂದು ತಂಡವನ್ನು ರಚನೆ ಮಾಡಲಾಗಿರುತ್ತದೆ.<br>7) ಕಲಬುರಗಿ ನಗರದಲ್ಲಿ ಅಕ್ರಮವಾಗಿ ಗಾಂಜಾ ಮಾರಾಟ ಮಾಡುವವರ ಮೇಲೆ ನಿಗಾ ಇಟ್ಟು, ಅಂತಹ ವ್ಯಕ್ತಿಗಳ ಚಲನವಲಗಳನ್ನು ಸೂಕ್ಷ್ಮವಾಗಿ ಗಮನಿಸಿ, ಮಾದಕ ವಸ್ತುಗಳ ದಂಧೆ ಮಾಡುವುದು ಕಂಡುಬಂದಲ್ಲಿ ದಾಳಿ ಮಾಡಿ ಕಾನೂನು ಕ್ರಮ ಜರುಗಿಸಲಾಗುತ್ತಿದೆ. |

ಒಇ 5 ಪಿಎನ್‌ಡಿ 2021

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು